# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆ ಆರ್ ಎನ್ ಎಸ್ -19

5ನೇ ವರ್ಷ 12ನೇ ಸಂಚಿಕೆ ಕೊಪ್ಪ 30-11-1986 ಭಾನುವಾರ ಬೆಲೆ 40 ಪೈಸೆ




## ಕಳವು ಮಾಲು ವಶ, ಇಬ್ಬರ ಸೆರೆ

**ಕೊಪ್ಪ : ಕಳೆದ ಒಂದೂವರೆ ವರ್ಷದಿಂದ ಇಲ್ಲಿನ ಪುರಸಭೆಯ ನೌಕರರ ನಿರ್ಜನ ವಸತಿ ಗೃಹವೊಂದರಿಂದ ಕಳುವಾಗುತ್ತ ಬಂದಿದ್ದ ಸುಮಾರು 10 ಸಾವಿರ ರೂ. ಮೌಲ್ಯದ ವಸ್ತುಗಳನ್ನು ಪೋಲೀಸರು ವಶಪಡಿಸಿಕೊಂಡು ಆರೋಪಿಗಳನ್ನು ಬಂಧಿಸಿದ್ದಾರೆ.**

ಹಿರೀಕೆರೆಯ ಸಮೀಪವಿರುವ ಮುಖ್ಯ ನೀರಿನ ಟ್ಯಾಂಕ್ ಬಳಿ ಕಟ್ಟಿಸಿರುವ ನೌಕರರ ವಸತಿಗೃಹ ಕಟ್ಟಡದಲ್ಲಿ ಯಾರೂ ವಾಸ ಇಲ್ಲದಿದ್ದು, ಅಲ್ಲಿ ಇಡಲಾಗಿದ್ದ ಪಿವಿಸಿ ಮತ್ತು ಜಿಐ ಪೈಪುಗಳು ಹಾಗೂ ಕಟ್ಟಡದ ಬಾಗಿಲು, ಕಿಟಕಿ, ಕಪಾಟು, ಚೌಕಟ್ಟು ಮುಂತಾದುವು 20-4-85ರಿಂದ ಕಳುವಾಗುತ್ತಿದ್ದವು. ಕಳೆದ 24ರಂದು ಇಂಥದೇ ಕಳವು ನಡೆದು ನ. 26ರಂದು ಪುರಸಭೆಯವರು ದೂರು ಸಲ್ಲಿಸಿದ್ದರು.

ಇನ್ ಚಾರ್ಜ್ ಠಾಣಾಧಿಕಾರಿಯಾಗಿದ್ದ ದಫೇದಾರ್ ರಾಮಕೃಷ್ಣಯ್ಯ ಮತ್ತು ಸಿಬ್ಬಂದಿಗಳು ಗುಮಾನಿಯ ವ್ಯಕ್ತಿಗಳಾದ ಹಿರೀಕೆರೆಯ ಜಾನಿ ಮಸ್ಕರೇನಸ್ ಮತ್ತು ಗುಣವಂತೆಯ ಲಿಯೊ ಡಿಸೋಜ ಇವರನ್ನು ಬಂಧಿಸಿ, ಅವರುಗಳು ನೀಡಿದ ಮಾಹಿತಿಯಂತೆ ಅವರ ಮನೆಗಳ ಬಳಿ ಬಚ್ಚಿಟ್ಟಿದ್ದ ಕದ್ದ ಬಹುತೇಕ ಎಲ್ಲಾ ವಸ್ತುಗಳನ್ನು ವಶಪಡಿಸಿಕೊಂಡರು.

ಆರೋಪಿಗಳನ್ನು ಡಿ. 6ರವರೆಗೆ ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದ್ದು, ಸರ್ಕಲ್ ಇನ್‌ಸ್ಪೆಕ್ಟರ್ ವೈ. ಡಿ. ಕೇಶವಾನಂದ ಮುಂದಿನ ತನಿಖೆ ನಡೆಸುತ್ತಿದ್ದಾರೆ.

## ಕುಟುಂಬ ಯೋಜನೆ ಲಾಟರಿ ಬಸರಿಕಟ್ಟೆಗೆ ಬಹುಮಾನ

ಬಸರಿಕಟ್ಟೆ: ಆ. 24ರಂದು ಇಲ್ಲಿನ ಪ್ರಾಥಮಿಕ ಆರೋಗ್ಯ ಘಟಕದಲ್ಲಿ ಉದರದರ್ಶಕ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡಿದ್ದ ಶ್ರೀಮತಿ ರತ್ನಮ್ಮ ಕೋಂ ಆದಿರಾಜಯ್ಯ ಇವರಿಗೆ ಕುಟುಂಬಯೋಜನೆ ಅದೃಷ್ಟ ಬಹುಮಾನದಲ್ಲಿ 500 ರೂ. ಗಳ ಮೂರನೇ ಬಹುಮಾನ ಬಂದಿರುವುದಾಗಿ ವೈದ್ಯಾಧಿಕಾರಿ ಧರ್ಮಣ್ಣಗೌಡ ತಿಳಿಸಿದ್ದಾರೆ

## ಸಂಕ್ಷಿಪ್ತ ಸುದ್ದಿಗಳು

### ಚೇರ್‌ಗೋಡಿನಲ್ಲಿ ತಾಳಮದ್ದಲೆ

ಶೃಂಗೇರಿ : ಇಲ್ಲಿಗೆ ಸಮೀಪದ ಚೇರ್‌ಗೋಡಿನ ತಿಮ್ಮಯ್ಯನವರ ಮನೆಯಲ್ಲಿ ಈಚೆಗೆ ಹೊನ್ನವಳ್ಳಿಯ ಶ್ರೀ ವೆಂಕಟೇಶ್ವರ ಯಕ್ಷಗಾನ ಕಲಾ ಸಂಘ ಹಾಗೂ ಅತಿಥಿ ಕಲಾವಿದರ ಕೂಡುವಿಕೆಯಿಂದ ಉತ್ತಮವಾದ ತಾಳಮದ್ದಲೆ ಕಾರ್ಯಕ್ರಮ ನಡೆಯಿತು. ಪ್ರಖ್ಯಾತ ಭಾಗವತ ಕಾಳಿಂಗ ನಾವುಡ, ಚಂಡೆವಾದಕರಾಗಿ ರಾಮಕೃಷ್ಣ ಮಂದರ್ತಿಯವರು ಹಾಗೂ ಮದ್ದಲೆವಾದಕರಾಗಿ ಸ್ಥಳೀಯ ಕಲಾವಿದ ಎಚ್. ಕೆ. ರಮೇಶ್ ಭಾಗವಹಿಸಿ ಪ್ರೇಕ್ಷಕರನ್ನು ರಂಜಿಸಿದರು.

### ಚಿ. ಕೊ. ಗ್ರಾಮೀಣ ಬ್ಯಾಂಕ್ ಠೇವಣಿ ಸಂಗ್ರಹ ಮಾಸ

ಹಾಲ್ಮುತ್ತೂರು : ಇಲ್ಲಿನ ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕ್ ಶಾಖೆ ನ. 7ರಿಂದ ಡಿ. 5ರವರೆಗೆ 'ಠೇವಣಿ ಸಂಗ್ರಹ ಮಾಸ'ವನ್ನು ಆಚರಿಸುತ್ತಿದ್ದು, ಇದನ್ನು ನ. 7ರಂದು ಎಚ್. ವೈ. ಸೀತಾರಾಮಭಟ್ಟರ ಅಧ್ಯಕ್ಷತೆಯಲ್ಲಿ 'ಮುಂಜಾವು' ಸಂಪಾದಕ ಸಿರಿಮನೆ ನಾಗರಾಜ್ ಉದ್ಘಾಟಿಸಿದರು. ಎಚ್. ಎಸ್. ಸೀತಾರಾಮಯ್ಯ ಮುಖ್ಯ ಅತಿಥಿಗಳಾಗಿದ್ದರು.

ಚಿ. ಕೊ. ಬ್ಯಾಂಕ್ ಈ ಠೇವಣಿ ಸಂಗ್ರಹ ಮಾಸದಲ್ಲಿ ತನ್ನ ಎಲ್ಲಾ ಶಾಖೆಗಳ ಮೂಲಕ 35 ಲಕ್ಷ ರೂ. ಠೇವಣಿ ಸಂಗ್ರಹಣೆ ಹಾಗೂ 25 ಸಾವಿರ ಹೊಸ ಖಾತೆಗಳನ್ನು ತೆರೆಯುವ ಗುರಿಯನ್ನು ಹಾಕಿಕೊಂಡಿದೆ. 1984ರಲ್ಲಿ ಆರಂಭಿಸಲಾದ 23 ಗ್ರಾಮೀಣ ಬ್ಯಾಂಕ್‌ಗಳ ಪೈಕಿ ಚಿ. ಕೊ. ಗ್ರಾಮೀಣ ಬ್ಯಾಂಕ್ ಪ್ರಥಮ ಸ್ಥಾನದಲ್ಲಿದೆ.

### ಮೇರುತಿ ಜೇಸಿಯಿಂದ ಸಾಕ್ಷರತಾ ಕಾರ್ಯಕ್ರಮ

ಬಿಳಾಲುಕೊಪ್ಪ: ಇಲ್ಲಿನ ಮೇರುತಿ ಜೇಸಿ ಸಂಸ್ಥೆಯು "ಸಾಕ್ಷರತಾ ಕಾರ್ಯಕ್ರಮ"ದನ್ವಯ ಕನ್ನಡ ರಾಜ್ಯೋತ್ಸವವಾದ ನ. 1ರಂದು ಮೇಗುಂದಾ ಹೋಬಳಿಯ 4 ಹಿ. ಪ್ರಾ. ಶಾಲೆಗಳಲ್ಲಿ ಆಯಾ ಗ್ರಾಮದ ಅನಕ್ಷರಸ್ಥರನ್ನು ಬರಮಾಡಿಕೊಂಡು ಅವರ ಹೆಸರು ಬರೆಯಲು ಕಲಿಸಲಾಯಿತು.

ಇದಲ್ಲದೆ ಮಕ್ಕಳ ದಿನಾಚರಣೆ ಅಂಗವಾಗಿ ತಾಲ್ಲೂಕಿನ ಎಲ್ಲಾ ಪ್ರೌಢಶಾಲೆಗಳಲ್ಲಿನ ವಿದ್ಯಾರ್ಥಿಗಳು ಒಬ್ಬೊಬ್ಬರೂ ಕನಿಷ್ಠ 10 ಜನ ಅನಕ್ಷರಸ್ಥರಿಗೆ ಅಕ್ಷರಾಭ್ಯಾಸ ಮಾಡಿಸಿದಲ್ಲಿ ಅಂಥವರಿಗೆ ಬಹುಮಾನ ನೀಡುವುದಾಗಿ ಮೇರುತಿ ಜೇಸಿ ಸಂಸ್ಥೆ ಪ್ರಕಟಿಸಿದೆ. ಈ ಬಗ್ಗೆ ಎಲ್ಲಾ ಶಾಲೆಗಳಿಗೆ ಪತ್ರ ಬರೆಯಲಾಗಿದ್ದು ಪ್ರಗತಿಯ ವರದಿಯನ್ನು ಕಾಯಲಾಗಿದೆ.

## 3.5ಲಕ್ಷ 'ನುಂಗಿ'14 ವರ್ಷ "ಜೀರ್ಣಿಸಿಕೊಂಡ" ಕಾಲುವೆಯಲ್ಲಿ ಕೊನೆಗೂ ಹರಿಯಿತು ನೀರು!

ಕುದುರೆಗುಂಡಿ : ಇಲ್ಲಿಗೆ ಸಮೀಪದ ಸೀತೂರಿನ ಬಳಿ ನಾಗರಮಕ್ಕಿಯಲ್ಲಿ ಅಬ್ಬಿಗುಂಡಿ ಹಳ್ಳಕ್ಕೆ ನಿರ್ಮಿಸಿರುವ ವಡ್ಡಿನ ಕಾಲುವೆಯನ್ನು ನ 21 ರಂದು ಶಾಸಕ ಗೋವಿಂದ ಗೌಡರು ಉದ್ಘಾಟಿಸಿದಾಗ, ಆ ಕಾಲುವೆಯುಅಡಿಯಲ್ಲಿ 'ಹೂತು' ಹೋಗಿದ್ದ ಭ್ರಷ್ಟತೆಯ ಕಳೇಬರವೊಂದು , ಬೆಳಕಿಗೆ ಬಂತು.

ಸುಮಾರು 14 ವರ್ಷದ ಹಿಂದೆ ಈ ಕಾಲುವೆ ನಿರ್ಮಾಣಕ್ಕೆಂದು ಮೂರುವರೆ ಲಕ್ಷ ರೂ. ಖರ್ಚಾಗಿದ್ದು, ಪಿಕ್-ಅಪ್ ಮಾತ್ರ ಉತ್ತಮವಾಗಿ ನಿರ್ಮಿಸಲ್ಪಟ್ಟಿದ್ದರೂ, 'ಕಾಲುವೆ' ಎನ್ನುವುದು ಕೇವಲ ಸರ್ಕಾರದ ಹಣ ನುಂಗಲಿಕ್ಕೆ ಒಂದು ನೆಪ ಮಾತ್ರವಾಗಿ ನಿರ್ಮಾಣವಾಗಿದೆ. ಗುಡ್ಡದ ಕಡೆ, ಎಲ್ಲೆಂದರಲ್ಲಿ ತೋಡಿರುವ ಈ ಕಾಲುವೆ ಕೆಲವೆಡೆ 50 ಅಡಿ ಆಳ ಹೊಂದಿದೆ. (ಮಣ್ಣಿನ ಕೆಲಸ ಜಾಸ್ತಿದಷ್ಟೂ ಕಾಮಗಾರಿಗಳಲ್ಲಿ ಲಾಭ ಜಾಸ್ತಿಯಷ್ಟೆ!) ಆದರೆ ಈವರೆಗೂ ಕಾಲುವೆಯಲ್ಲಿ ಒಂದು ಹನಿ ನೀರೂ ಹರಿದಿರಲಿಲ್ಲ. ಅದು ಹರಿಯುವಂತೆಯೂ ಇರಲಿಲ್ಲ.

ಈಗ ಎನ್‌ಆರ್‌ಇಪಿ ಯಿಂದ 45 ಸಾವಿರ ರೂ. ವೆಚ್ಚದಲ್ಲಿ ಹೊಸದಾಗಿ ಕಾಲುವೆ ನಿರ್ಮಿಸಿದ್ದು. 4-6 ಅಡಿಗಳಿಗಿಂತ ಹೆಚ್ಚು ಎಲ್ಲೂ ಆಳ ಹೋಗಿಲ್ಲವೆನ್ನಲಾಗಿದೆ.

ಈ ವಿಚಾರ ಬಹಿರಂಗಗೊಳಿಸಿದ ಗೌಡರು "ಹಿಂದೆಲ್ಲ ನುಂಗುವುದೇ ಗುರಿಯಾಗಿ, ಅವರ ಉಸ್ತುವಾರಿ ನೋಡಿಕೊಳ್ಳುವ ನಾಯಕರೂ ಅಂಥವರೇ ಆಗಿರುತ್ತಿದ್ದರು. ಆದರೆ ಈಗ ನಾವು ಜನತೆಯ ಓಟಿನ ಋಣ ತೀರಿಸಲು ಹೃತ್ಪೂರ್ವಕ ಶ್ರಮಿಸುತ್ತಿದ್ದೇವೆ"ಎಂದರು. ಈ ಕಾಲುವೆಯನ್ನು ದಕ್ಷವಾಗಿ ನಿರ್ಮಿಸಿದ ಸಣ್ಣ ನೀರಾವರಿ ಇಲಾಖೆಯ ಇಂಜಿನಿಯರುಗಳನ್ನು ಅವರು ಶ್ಲಾಘಿಸಿದರು.

ಮಾಗ ಚಂದ್ರಶೇಖರ್ ಅಧ್ಯಕ್ಷತೆ ವಹಿಸಿದ್ದು, ಶರತ್ ಕಲ್ಲಿ, ಗೋಪಾಲರಾವ್, ಆನಂದರಾಮ ಭಟ್ ಮುಖ್ಯ ಅತಿಥಿಗಳಾಗಿದ್ದರು.

(ವರದಿ: ಎಂ.ಆರ್. ಭಾಸ್ಕರ್.)

## ಅರಣ್ಯ ಇಲಾಖೆ ಕ್ರಮ: ಸ್ಥಳೀಯರ ಅಸಮಾಧಾನ

ಆಗಳಗಂಡಿ: ಇಲ್ಲಿಗೆ ಸಮೀಪದ ಸತ್ತಿಕಲ್ಲು ಎಂಬಲ್ಲಿ ಶೃಂಗೇರಿ ಅರಣ್ಯ ವಲಯದ ಕಾವಲುಗಾರರು ಪ್ಲಾಂಟೇಶನ್ ಒಳಗೆ ಬೆಳೆದಿದ್ದ ಹುಲ್ಲನ್ನು ಮೇಯುತ್ತಿದ್ದ ಹಸುಗಳನ್ನು ಈಚೆಗೆ ಅರಣ್ಯ ಸಿಬ್ಬಂದಿ ದೊಡ್ಡಿಗೆ ಹೊಡೆದುಕೊಂಡು ಹೋಗುತ್ತ ದಾರಿಯಲ್ಲಿ ಸಿಕ್ಕವನ್ನೂ ಹೊಡೆದುಕೊಂಡು ಹೋಗಿದ್ದು ಎಷ್ಟೋ ಜಾನುವಾರುಗಳು ವಾಪಸು ಸಿಕ್ಕಲಿಲ್ಲವೆಂದು ಗ್ರಾಮಸ್ಥರು ದೂರಿದ್ದಾರೆ.

ಈ ಹುಲ್ಲು ಬೇಸಿಗೆಯಲ್ಲಿ ಒಣಗುವುದರಿಂದ ಬೆಂಕಿ ಬಿದ್ದೀತೆಂದು ಗಾರ್ಡ್‌ರೇ ದನ ಮೇಯಿಸಲು ಹೇಳಿದ್ದೆಂದಿರುವ ರೈತರು, ಇದರ ಬದಲು ಕೆಲವು ಜನ ಜವಾಬ್ದಾರಿಯುತ ವ್ಯಕ್ತಿಗಳಿಗೆ ಒಳಗಿನ ಹುಲ್ಲನ್ನು ಕೊಯ್ದು ಒಯ್ಯಲು ಅನುಮತಿ ಕೊಡುವುದು ಲೇಸು ಎಂದಿದ್ದಾರೆ.

### ಅಡ್ಡಗದ್ದೆಯಲ್ಲಿ ಸಹಕಾರಿ ಸಪ್ತಾಹ

ಅಡ್ಡಗದ್ದೆ: ಕಾವಡಿ ಸೇವಾ ಸಹಕಾರಿ ಸಂಘದ ಆಶ್ರಯದಲ್ಲಿ ಅಖಿಲ ಭಾರತ ಸಹಕಾರಿ ಸಪ್ತಾಹವನ್ನು ಇಲ್ಲಿ ನ. 19ರಂ... ಕೆ. ಎಂ. ಶ್ರೀನಿವಾಸ್‌ರ ಅಧ್ಯಕ್ಷತೆಯಲ್ಲಿ ... ಚರಿಸಲಾಯಿತು. ಈ ಸಮಾರಂಭ... ಗೋವಿಂದರಾವ್ ಪುಣೇಕರ್ ಹಾ... ಕಿರಕೋಡು ಸೀತಾರಾಮಭಟ್ಟರು ಮು... ಸುತ್ತಮುತ್ತಲಿನ ಸಹಕಾರಿ ಸಂಘಗಳ... ಉಪಸ್ಥಿತರಿದ್ದರು.

### ಕೊಗ್ರೆ ಕಾರ್ಪೊರೇಶನ್ ಬ್ಯಾಂ... ಗ್ರಾಹಕರ ಸಮಾವೇಶ

ಶಾಂತಿಗ್ರಾಮ: ಇಲ್ಲಿನ ಕಾರ್ಪೊರೇ... ಬ್ಯಾಂಕಿನ ಗ್ರಾಹಕರ ಸಮಾವೇಶ ... ಜರುಗಿತು. ಬ್ಯಾಂಕಿನ ಹಾಸನ ವಿಭಾ... ಮ್ಯಾನೇಜರ್ ಬಿ ಹರಿಶ್ಚಂದ್ರಭಟ್ ... ಅತಿಥಿಗಳಾಗಿದ್ದರು ಗ್ರಾಹಕರ ಪರವಾ... ಎಸ್. ಅನಂತರಾವ್, ಕೆ. ಆರ್. ... ಶೇಖರ್, ಎನ್. ಪಿ. ಶ್ರೀಪಾಲಯ್ಯ... ಎಚ್. ಮೊಯಿದ್ದೀನ್, ಬಿ. ಜಿ. ರ... ಕೆ.ಆರ್. ದೇವೇಂದ್ರ, ಕೆ.ಶಿವಶಂಕರ ... ಮೊದಲಾದವರು ಕೇಳಿದ ಪ್ರ... ಅವರು ಸೂಕ್ತ ಉತ್ತರವಿತ್ತರು. ಅಧ್ಯಕ್ಷತೆಯನ್ನು ಬಿ.ಕೆ. ವೆಂಕಪ್ಪ... ಸಿದ್ದರು. ಶಾಖಾಧಿಕಾರಿ ಪಿ. ಎಸ್... ಸ್ವಾಗತಿಸಿ, ವಂದಿಸಿದರು. ಸಮಾ... 120ಕ್ಕೂ ಹೆಚ್ಚು ಗ್ರಾಹಕರು ... ದ್ದರು.

# ನಮ್ಮ ಸಾಧನೆಯ ಸ್ಮರಣೀಯ ಕನ್ನಡ ರಾಜ್ಯೋತ್ಸವ

★ ದುರ್ಬಲ ವರ್ಗಗಳ ಏಳಿಗೆಗಾಗಿ ವಿನೂತನ ಯೋಜನೆಗಳು

★ ಬರದ ವಿರುದ್ಧ ಸಮರ

★ ಹಳ್ಳಿಹಳ್ಳಿಗೂ ಅಧಿಕಾರ ವಿಕೇಂದ್ರೀಕರಣ

ಕರ್ನಾಟಕ ಸರ್ಕಾರಕ್ಕೆ ತನ್ನ ಹೊಣೆಗಾರಿಕೆಯ ಬಗ್ಗೆ ಸಂಪೂರ್ಣ ಅರಿವಿದೆ. ತನ್ನನ್ನು ಆರಿಸಿದ ಜನ ಕೋಟಿಯ ಅಭಿಪ್ರಾಯಕ್ಕೆ ಸರ್ಕಾರ ಬದ್ಧವಾಗಿದೆ. ಜನತೆಗಾಗಿ ಸರ್ಕಾರ ಏನೆಲ್ಲಮಾಡಿದೆ, ಮಾಡುತ್ತಿದೆ ಎಂಬುದನ್ನು ಅರಿಯುವಹಕ್ಕು ಅವರಿಗಿದೆ. ಈ ಮಾಹಿತಿಯನ್ನು ಜನರಿಗೆ ತಿಳಿಯಪಡಿಸುವುದು ಸರ್ಕಾರದ ಕರ್ತವ್ಯ. ಈ ಪರಸ್ಪರ ಅರಿವಿನಿಂದ ಮಾತ್ರ ಸರ್ಕಾರ ಮತ್ತು ಜನತೆಯ ನಡುವೆ ಸೌಹಾರ್ದಯುತ ಸಂಬಂಧ ಬೆಳೆಯಲು ಸಾಧ್ಯ.

ನಿಮಗೆಲ್ಲ ತಿಳಿದಿರುವಂತೆ ನಮ್ಮರಾಜ್ಯ ಕಳೆದ ನಾಲ್ಕು ವರ್ಷಗಳಿಂದ ಸತತವಾಗಿ ಹಿಂದೆಂದೂ ಕಂಡರಿಯದ ಭೀಕರ ಬರಗಾಲವನ್ನೆದುರಿಸಬೇಕಾಯಿತು. ಪ್ರಕೃತಿ ವಿಕೋಪದ ಈ ದುರ್ಭರ ಸನ್ನಿವೇಶದಲ್ಲೂ ಸರ್ಕಾರದ ಸಾಧನೆ ಕಣ್ಣಿಗೆ ಕಾಣುವಂತಹುದು, ಮೆಚ್ಚುವಂತಹುದು. ಕರ್ನಾಟಕ ಒಂದು ರಾಜ್ಯವಾಗಿ ರೂಪುಗೊಂಡು ಮೂವತ್ತು ಸಂವತ್ಸರಗಳು ಸಂದಿವೆ. ಈ ಸಂದರ್ಭದಲ್ಲಿ ಜನತೆಯ ಆಶೋತ್ತರಗಳನ್ನು ಈಡೇರಿಸಲು ಸರ್ಕಾರ ಅನುಷ್ಠಾನಗೊಳಿಸಿರುವ ಯೋಜನೆಗಳ ಹಲವು ವಿವರಗಳನ್ನು ಜನತೆಯ ಮುಂದಿಡಲು ಹೆಮ್ಮೆ ಎನಿಸುತ್ತದೆ.

ಸಮಾಜದ ಹಿಂದುಳಿದ ವರ್ಗ ಮತ್ತು ಕಡುಬಡವರನ್ನು ಬಡತನದ ರೇಖೆಯಿಂದ ಮೇಲೆತ್ತಿ ಅವರ ಜೀವನ ಸುಧಾರಣೆಗಾಗಿ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ಸರ್ಕಾರ ಕೈಗೊಂಡಿರುವ ಕಾರ್ಯಕ್ರಮಗಳು ರಾಷ್ಟ್ರದಲ್ಲೇ ಮಾದರಿ ಎನಿಸಿವೆ. ಗ್ರಾಮೀಣ ಪ್ರದೇಶಕ್ಕೆ ಕುಡಿಯುವ ನೀರು, ಶಾಲಾ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರ, ಕಡುಬಡವರಿಗೆ ಅತಿ ಕಡಿಮೆ ದರದಲ್ಲಿ ಆಹಾರ ಧಾನ್ಯ ಒದಗಿಸಲು ಹಸಿರು ಕಾರ್ಡು, ಅಸಂಘಟಿತ ಕಾರ್ಮಿಕರು ಅಪಘಾತಕ್ಕೊಳಗಾದರೆ ನೆರವಾಗುವ 'ಆಶಾಕಿರಣ', ಕಾರ್ಮಿಕ ಗರ್ಭಿಣಿ ಸ್ತ್ರೀಯರಿಗೆ 'ಹೆರಿಗೆ ಭತ್ಯೆ', ಅನಾಥ ವಿಧವೆಯರಿಗೆ ಮಾಸಾಶನ, ಬಡವರು ಕಡಿಮೆ ಖರ್ಚಿನಲ್ಲಿ ಮದುವೆ ಮಾಡಲು 'ತಾಳಿಭಾಗ್ಯ', ರೈತ ಸಮುದಾಯಕ್ಕೆ ಭಾರೀ ಪ್ರಮಾಣದ ರಿಯಾಯಿತಿ, ಜನತೆಯ ನಿತ್ಯದ ಬೇಡಿಕೆ ಪೂರೈಸಲು ಸಾಮಾಜಿಕ ಅರಣ್ಯ ಕಾರ್ಯಕ್ರಮ, ಸಣ್ಣ ರೈತರು, ಕೃಷಿ ಕಾರ್ಮಿಕರು ಹಾಗೂ ಕುಶಲ ಕರ್ಮಿಗಳಿಗೆ ಅನುಕೂಲವಾಗುವ ತೀವ್ರ ಗ್ರಾಮೀಣಾಭಿವೃದ್ಧಿ ಕಾರ್ಯ — ಹೀಗೆ ಜನಹಿತ ದೃಷ್ಟಿಯ ಹತ್ತೆಂಟು ಯೋಜನೆಗಳ ಪರಿಣಾಮಕಾರಿ ಅನುಷ್ಠಾನ.

ಇದಲ್ಲದೆ ಅಧಿಕಾರ ವಿಕೇಂದ್ರೀಕರಣದ ಹಾದಿಯಲ್ಲಿ ಹೊಸ ಅಧ್ಯಾಯ ಆರಂಭಿಸಲಿರುವ ಜಿಲ್ಲಾ ಪರಿಷತ್ ಮಸೂದೆಯನ್ನು ಅನುಷ್ಠಾನಗೊಳಿಸಲು ದೃಢ ನಿರ್ಧಾರ ಕೈಗೊಂಡಿರುವ ಕರ್ನಾಟಕ ಸರ್ಕಾರ ಈ ದಿಸೆಯಲ್ಲಿ ದಿಟ್ಟ ಹೆಜ್ಜೆ ಇಟ್ಟಿದೆ. ಇದರಿಂದ ಗ್ರಾಮೀಣ ಜನತೆ ಸ್ಥಳೀಯ ಅಭಿವೃದ್ಧಿ ಕಾರ್ಯಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ಅಧಿಕಾರ ಪಡೆಯಲಿದೆ.

## ಕರ್ನಾಟಕ ಸರ್ಕಾರ
## ಪ್ರಜಾಹಿತ ಕಾರ್ಯದ ಪರಂಪರೆಯನ್ನು ಮುಂದುವರಿಸಲು
## ಪುನಃ ಮುಡಿಪು ಕಟ್ಟುತ್ತದೆ

ವಾ. ಪ್ರ. ಇ. / ವಾ. ಪ್ರ. ವಿ. / ಸಿ. ಆರ್. / ಸಿ. 3 / 86-87 / 398
ದಿನಾಂಕ : 23/24-10-1986



ಕರ್ನಾಟಕ ವಾರ್ತೆ

## ಓದುಗರ ಪತ್ರಗಳು

### "ಪುಸ್ತಕ ಭಂಡಾರ"

ಮಾನ್ಯರೆ,

ಚಿಕ್ಕಮಗಳೂರು ಜಿಲ್ಲೆಯ ಶತಮಾನೋತ್ಸವದ ಅಂಗವಾಗಿ ಬಹಳಷ್ಟು ಉತ್ತಮ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿರುವುದು ಸರಿಯಷ್ಟೆ. ಅವುಗಳಲ್ಲಿ ಕೊಪ್ಪ ತಾಲ್ಲೂಕಿನ ಹಿರೇಕೊಡಿಗೆ ಗ್ರಾಮದ ಹಿರೇಕೊಡಿಗೆಯಲ್ಲಿ ರಾಷ್ಟ್ರಕವಿ ಕುವೆಂಪು ಜನ್ಮಸ್ಥಳದ ನೆನಪಿಗೆ ಸುಮಾರು 4-5 ಲಕ್ಷ ರೂ.ಗಳ ವೆಚ್ಚದ "ಪುಸ್ತಕ ಭಂಡಾರ" ನಿರ್ಮಿಸುವುದೂ ಒಂದೆಂದು ತಿಳಿದುಬಂದಿದೆ. ಹಿರೇಕೊಡಿಗೆಯು 2-3 ಮನೆಗಳನ್ನು ಮಾತ್ರ ಹೊಂದಿದ್ದು 1-2 ಮೈಲಿ ಅಂತರದಲ್ಲಿಯೂ ತೀರಾ ಕಡಿಮೆ ಜನಸಂಖ್ಯೆ ಹೊಂದಿದೆ. ಈ ಸ್ಥಳಕ್ಕೆ ಬದಲಾಗಿ ಇಲ್ಲಿಗೆ 2 ಮೈಲಿ ಅಂತರದ ಹಿರೇಕೊಡಿಗೆ (ಗಡಿಕಲ್) ಯಲ್ಲಿ "ಪುಸ್ತಕ ಭಂಡಾರ" ವನ್ನು ಮಾಡಿದಲ್ಲಿ ಸಾರ್ವಜನಿಕರು, 400-500 ವಿದ್ಯಾರ್ಥಿಗಳು, 60-70 ಯುವಕರುಗಳು ಸಹಾ ಇದರ ಉಪಯೋಗ ಪಡೆಯಬಹುದಾಗಿದೆ.. "ಕವಿಶೈಲ" ದಂತಹ ಪ್ರೇಕ್ಷಣಿಯ ಸ್ಥಳ ಮತ್ತು ಕುಪ್ಪಳಿ ಸಹಾ ಗಡೀಕಲ್ಲಿಗೆ ಕೇವಲ 1/2 ಮೈಲಿ ಅಂತರದಲ್ಲಿವೆ. 1-2 ಮೈಲಿ ಸುತ್ತಳತೆಯಲ್ಲಿ ಬಹಳಷ್ಟು ಹಳ್ಳಿ ಹಾಗೂ ಜನಸಂಖ್ಯೆಯಿರುವ ಗಡೀಕಲ್ಲು ನಿಜಕ್ಕೂ ಪ್ರಶಸ್ತ ಸ್ಥಳವೆನಿಸುವುದಲ್ಲದೆ ಈ ಯೋಜನೆಯ ಸದುಪಯೋಗ ಸಾರ್ವಜನಿಕರಿಗೂ ದೊರಕಿ ಸಾರ್ಥಕವೆನಿಸುತ್ತದೆ.

ಶಾಸಕರಿಗೆ ಮತ್ತು ಜಿಲ್ಲಾಧಿಕಾರಿಗಳಿಗೂ ಈ ಬಗ್ಗೆ ಊರಿನವರು ಮನವಿ ಸಲ್ಲಿಸಲಿರುವರು. ಸಂಬಂಧಪಟ್ಟವರು ಈ ಬದಲಾವಣೆಯತ್ತ ಪರಿಶೀಲಿಸಬೇಕಾಗಿ ವಿನಂತಿ

—**ಹೊಸ್ಮನೆ ರಮೇಶ್**, ಗಡೀಕಲ್.

### ನಾವು ಓಟು ಮಾಡಬೇಕೆ ?

ಮಾನ್ಯರೆ,

ಕೊಪ್ಪ ತಾ॥ ಬೊಮ್ಲಾಪುರ ಗ್ರಾಮದ ಮೆಣಸೂರು – ಮಡುವಾಡಿಯಲ್ಲಿ ಹಿಂದುಳಿದ ಕುಂಬಾರ ಜನಾಂಗಕ್ಕೆ ಸೇರಿದ 50 ಕುಟುಂಬಗಳು ವಾಸವಾಗಿದ್ದು, ಸ್ವಾತಂತ್ರ್ಯ ಬಂದು 40 ವರ್ಷಗಳ ನಂತರವೂ ಯಾವುದೇ ಸೌಕರ್ಯಗಳಿಲ್ಲದೆ ತೊಳಲಾಡುತ್ತಿದ್ದೇವೆ. ಇಲ್ಲಿನ ಕೆಲವು ಅತಿ ಪ್ರಮುಖ ಸಮಸ್ಯೆಗಳು :

1) ಬೊಮ್ಲಾಪುರದಿಂದ ಮೆಣಸೂರು-ಮಡುವಾಡಿಗಳಿಗೆ ರಸ್ತೆ ರಿಪೇರಿ; 2) ಅದ್ದಡ-ಬೊಮ್ಲಾಪುರ ರಸ್ತೆಯಲ್ಲಿ ಮೆಣಸೂರು ಹಳ್ಳಕ್ಕೆ ಸೇತುವೆ; 3) ಇಲ್ಲಿ ರಸ್ತೆಯ ಬದಿಯಲ್ಲೇ ಒಂದು ಬಾವಿ, ಸಂಕ ಇತ್ಯಾದಿ ಇವೆ. ಮಕ್ಕಳು-ಕಾರ್ಮಿಕರು ಓಡಾಡಬೇಕು. ಆದ್ದರಿಂದ ಈ ಭಾಗದಲ್ಲಿ ರಸ್ತೆ ದೀಪ ಬೇಕು. ಈ ಬಗ್ಗೆ ಸಂಬಂಧಪಟ್ಟವರಿಗೆಲ್ಲ ಕೊಟ್ಟ ಅಸಂಖ್ಯ ಮನವಿಗಳು ತಿರಸ್ಕರಿಸಲ್ಪಟ್ಟಿವೆ; 4) ಭಾಗ್ಯಜ್ಯೋತಿ; 5) ಅಂಗನವಾಡಿ; 6) ಮನೆಗಳ ನಡುವೆ ನಿರ್ಲಕ್ಷವಾಗಿ ಎಳೆಯಲಾಗಿರುವ ಪವರ್ ಲೈನ್ ಸ್ಥಳಾಂತರ ಅಥವಾ ಅದಕ್ಕೆ ಬಲೆ (ಗಾರ್ಡಿಂಗ್?) ಆಗಬೇಕು; 7) 5 ಕುಟುಂಬಗಳಿರುವ ಮಡುವಾಡಿಗೆ ಒಂದು ಕುಡಿವ ನೀರಿನ ಬಾವಿ; 8) ಕೃಷಿ ಕಾರ್ಮಿಕರು, ಅತಿ ಸಣ್ಣ ರೈತರು ಇರುವ ಈ ಪ್ರದೇಶಕ್ಕೆ ಒಂದು ಸಣ್ಣ ಕೈಗಾರಿಕೆ, ಇತ್ಯಾದಿ

ನಮಗೂ ಮನುಷ್ಯರಂತೆ ಬದುಕುವ ಆಸೆ ಇರುವುದರಿಂದ ಸಂಬಂಧಪಟ್ಟವರು ಈ ಕೆಲವು ಅತಿ ಅಗತ್ಯದ ಸೌಕರ್ಯಗಳನ್ನು ಒದಗಿಸಿ ಅನಂತರ "ನಾವು ಓಟು ಹಾಕಬೇಕೆ?" ಎಂಬುದನ್ನು ತಿಳಿಸಲಿ.

—ನೊಂದ ಗ್ರಾಮಸ್ಥರು
(25 ಸಹಿಗಳಿವೆ)

### ಆಯ್ಕೆ

ನಿಲುವಾಗಿಲು : ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘಕ್ಕೆ 1986-87ನೆ ಸಾಲಿಗೆ ಎಚ್.ಜಿ. ಶ್ರೀರಮಣರಾವ್ ಅಧ್ಯಕ್ಷರಾಗಿಯೂ, ಈ ಕೆಳಕಂಡವರು ನಿರ್ದೇಶಕರಾಗಿಯೂ ಆಯ್ಕೆಯಾಗಿದ್ದಾರೆ: ಎನ್.ಬಿ. ತಿಮ್ಮಪ್ಪ, ಕೆ.ಸಿ. ರಾಮಪ್ಪ, ಕೆ.ಎಸ್. ರತ್ನಮ್ಮ, ಎ.ಎಸ್. ಶ್ರೀನಿವಾಸ ಎಂ.ಪಿ. ಚಂದ್ರಶೇಖರ, ಬಿ.ಎಸ್. ಕೃಷ್ಣಮೂರ್ತಿ ಎಸ್ಸೆಂ. ರವೀಂದ್ರ, ಮಂಜಣ್ಣ ಯಡ್ತಾಳ

## ರಂಜನೀಯ ಸರಳ ಸಮಾರಂಭದಲ್ಲಿ
# ಮಿನುಗು' ಕವನ ಸಂಕಲನ ಬಿಡುಗಡೆ

ಹೇರೂರು: ಮಲೆನಾಡಿನ ಉದಯೋ ...ತ್ತಿ ಕವಿಗಳ 'ಮಿನುಗು' ಕವನ ಸಂಕಲ ...ಬಿಡುಗಡೆ ಮತ್ತು ಅದರ ಪ್ರಕಾಶಕ ...ದ 'ಹು.ವಾ. ಪ್ರಕಾಶನ'ದ ಔಪಚಾರಿಕ ...ದ್ಘಾಟನೆ ಇಲ್ಲಿಗೆ ಸಮೀಪದ ವೀರಗಲ್ಲು ...ಕ್ಕೆಯಲ್ಲಿ ಈಚೆಗೆ ಸರಳ, ಸುಂದರ ಸಮಾ ...ಭದಲ್ಲಿ ನೆರವೇರಿತು.

ಎಚ್.ಪಿ. ಚಂದ್ರಯ್ಯ ಹೆಗ್ಡೆ ಅಧ್ಯಕ್ಷತೆ ...ಹಿಸಿದ್ದು, ಇದೇ ಸಂದರ್ಭದಲ್ಲಿ ಗ್ರಾಮಸ್ಥ ...ಶ್ರಮದಾನದಿಂದ ನಿರ್ಮಿಸಿದ್ದ ಕ್ರೀಡಾಂ ...ಣವನ್ನು ಎಲೆಮಡಲು ಜನಾರ್ದನ ...ಬ್ಬಾರ್ ಉದ್ಘಾಟಿಸಿದರು. ಕವಿ ...ಹೇರೂರು ಮೆನನ್, ಬಿ. ಪಿ. ರಮೇಶ್ ...ಮುಖ್ಯ ಅತಿಥಿಗಳಾಗಿದ್ದರು. ಕವಯಿತ್ರಿ ...ಕನ್ಯಾ ಎಂ. ರಾವ್ ಕವನ ಸಂಕಲನ ...ಬಿಡುಗಡೆ ಮಾಡಿದರು. ಸಿರಿಮನೆ ನಾಗ ...ರಾಜ್ ಪ್ರಕಾಶನವನ್ನು ಉದ್ಘಾಟಿಸಿದರು. ...ಹಾಜರಿದ್ದ ಕವಿಗಳಿಗೆ ಹುಲಸೆ ವಾಸುದೇ ...ವಯ್ಯ ನೆನಪಿನ ಕಾಣಿಕೆಗಳನ್ನು ನೀಡಿದರು ...ಹು.ವಾ. ಶ್ರೀಪ್ರಕಾಶ್ ಮತ್ತು ಶ್ರೀವತ್ಸ ...ಪ್ರಾಸಂಗಿಕವಾಗಿ ಭಾಷಣ ಮಾಡಿದರು.

ಅನಂತರ ನಡೆದ ಸಾಂಸ್ಕೃತಿಕ ಕಾರ್ಯ ...ಕ್ರಮಗಳು ಉತ್ತಮ ಮಟ್ಟದಲ್ಲಿದ್ದವು. ಶ್ರೀ ...ವತ್ಸ ಅವರು ವಿವಿಧ ಕಾವ್ಯಗಳಿಂದ ಆಯ್ದು ...ಸಂಯೋಜಿಸಿದ 'ಕಾರ್ತಿಕ ಮಾಸ' ಮತ್ತು ...'ಕಪಿಲವಸ್ತುವಿನಿಂದ ಉದಿಸಿ ಬಂದನಾ ತಂ ...ದೆ' ಎಂಬ ಎರಡು ರೂಪಕಗಳು ಹಾಗೂ "ಬದುಕೊಡಾ ಸೈಯೊಡಾ" ಎಂಬ ತುಳು ...ನಾಟಕ ಮತ್ತು ಇತರ ವೈವಿಧ್ಯಮಯ ಕಾ ...ರ್ಯಕ್ರಮಗಳು ಸುತ್ತಮುತ್ತಲ ಹಳ್ಳಿಗಳಿಂ ...ದ, ಎಸ್ಟೇಟುಗಳಿಂದ ಕಿಕ್ಕಿರಿದು ಸೇರಿದ್ದ ಪ್ರೇಕ್ಷಕರನ್ನು ರಂಜಿಸಿದವು.

ಸುಕುಮಾರ ಹೆಗ್ಡೆಯವರ ಕಾರ್ಯಕ್ರಮ ಸಂಯೋಜನೆ, ಎಂ ಕೆ. ಪ್ರಭಾವತಿ (ಬಸರೀಕಟ್ಟೆ) ಮತ್ತು ಡಾ|| ಡಿಎಂಜೆ ರಾವ್ ಬಳಗ ಇವರ ಸಂಗೀತ ಹಿತಮಿತವಾಗಿದ್ದು, ಈ ಕಾರ್ಯಕ್ರಮಗಳು ಹು.ವಾ. ಪ್ರಕಾಶನ ಮತ್ತು ಹಳೇ ವಿದ್ಯಾರ್ಥಿ ಸಂಘ ಇವರ ಆಶ್ರಯದಲ್ಲಿ ನಡೆದವು ಎಚ್.ಎಸ್. ಸೀತಾರಾಮಯ್ಯ ಸ್ವಾಗತಿಸಿ, ಶ್ರೀಪ್ರಕಾಶ್ ವಂದಿಸಿದರು.

## ಕೊಪ್ಪ ತಾ|| ಮಟ್ಟದ ಪ್ರಾ||ಶಾಲೆಗಳ ಕ್ರೀಡಾಕೂಟ

ಬಸರೀಕಟ್ಟೆ: ಕೊಪ್ಪ ತಾಲ್ಲೂಕು ಮಟ್ಟದ ಪ್ರೌಢಶಾಲೆಗಳ ಕ್ರೀಡಾಕೂಟ ನ. 6 ಮತ್ತು 7ರಂದು ಇಲ್ಲಿ ನಡೆಯಿತು. ಎಂ. ಜಿ. ಮೇದಪ್ಪ ಕೂಟವನ್ನು ಉದ್ಘಾಟಿಸಿದರು. ಪಿ.ಎಸ್. ಭಟ್ ಬಹುಮಾನ ವಿತರಿಸಿದರು. ಈ ಕೂಟವನ್ನು ಸದ್ಗುರು ಪ್ರೌಢಶಾಲೆಯವರು ಅತ್ಯುತ್ತಮವಾಗಿ ವ್ಯವಸ್ಥೆಗೊಳಿಸಿದ್ದರು. ಮಳೆಯ ಕಾರಣ ಅಂತಿಮ ಪಂದ್ಯಗಳು ನ. 14ರಂದು ಕೊಪ್ಪದಲ್ಲಿ ನಡೆದವು. ಬಿಳಾಲುಕೊಪ್ಪ ಮೇರುತಿ ಜೇಸೀಸ್ ನವರು ಈ ಸಂದರ್ಭದಲ್ಲಿ ಕ್ರೀಡಾಪಟುಗಳ ಮತ್ತು ಅಧಿಕಾರಿಗಳ ಪ್ರಯಾಣ ವೆಚ್ಚವನ್ನು ಭರಿಸಿದರು. ಅಲ್ಲದೆ ಕ್ರೀಡಾ ಕೂಟದಲ್ಲಿ ಸ್ವಚ್ಛತೆಗೆ ವಿಶೇಷ ಗಮನ ನೀಡಿದ ಜೇಸೀ ಸಂಸ್ಥೆ ಅಂದ ...ಡಿನ ಬೆಲೆಗೆ ಹಣ್ಣು ಮತ್ತು ಗ್ಲೂಕೋಸನ್ನು ಒದಗಿಸಿತ್ತು.

# ಡಿಂಪಲ್, ಶಿವಮಂಜ ಛಾಂಪಿಯನ್ಸ್; ಕೊಪ್ಪ ತಾಲ್ಲೂಕಿಗೆ ಸಮಗ್ರ ಪ್ರಶಸ್ತಿ

ಕೊಪ್ಪ: ಇಲ್ಲಿ ನ. 17 ರಿಂದ 19ರವರೆಗೆ ನಡೆದ ಜಿಲ್ಲಾ ಮಟ್ಟದ ಪ್ರೌಢಶಾಲೆಗಳ ಕ್ರೀಡಾಕೂಟದಲ್ಲಿ ಇಲ್ಲಿನ ಪ|| ಕಿರಿಯ ಕಾಲೇಜಿನ ಕು|| ಡಿಂಪಲ್ ಅಜಿಲ ಹಾಗೂ ಲಿಂಗದಹಳ್ಳಿ ಶಾಲೆಯ ಶಿವಮಂಜ ಕ್ರಮವಾಗಿ ಬಾಲಕಿಯರ ಮತ್ತು ಬಾಲಕರ ವೈಯಕ್ತಿಕ ಪ್ರಶಸ್ತಿ ಹಾಗೂ 100 ರೂ. ಬಹುಮಾನಗಳನ್ನು ಗಳಿಸಿದರು. ದ್ವಿತೀಯ ಸ್ಥಾನ ಕ್ರಮವಾಗಿ ಜಯಪುರದ ವಿಶಾಲಾಕ್ಷಿ ಹಾಗೂ ಕೊಪ್ಪದ ಮಲ್ಲಿಕ ಮತ್ತು ಹರಿಹರಪುರದ ಮಂಜ ಹಾಗೂ ಚಿಕ್ಕಗಳೂರಿನ ಶಿವಕುಮಾರ್ ಹಂಚಿಕೊಂಡು 75 ರೂ. ನಗದು ಬಹುಮಾನ ಗಳಿಸಿದರು.

ವೈಯಕ್ತಿಕ ಶಾಲಾ ಪ್ರಶಸ್ತಿಯನ್ನು ಬಾಲಕಿಯರ ವಿಭಾಗದಲ್ಲಿ ಕೊಪ್ಪದ ಪದವಿಪೂರ್ವ ಕಾಲೇಜು ಗಳಿಸಿದರೆ ಬಾಲಕರ ವಿಭಾಗದಲ್ಲಿ ಲಿಂಗದಹಳ್ಳಿ ಸರ್ಕಾರಿ ಪ್ರೌಢಶಾಲೆ ಗಳಿಸಿತು. ಬಾಲಕರ ವಿಭಾಗದಲ್ಲಿ 43 ಮತ್ತು ಬಾಲಕಿಯರ ವಿಭಾಗದಲ್ಲಿ 64 ಗುಣಗಳನ್ನು ಗಳಿಸಿದ ಕೊಪ್ಪ ತಾಲ್ಲೂಕು ಎರಡೂ ವಿಭಾಗಗಳ ಸಮಗ್ರ ಪ್ರಶಸ್ತಿಯನ್ನು ಪಡೆಯಿತು. 33 ಗುಣ ಗಳಿಸಿದ ಚಿಕ್ಕಮಗಳೂರು ಬಾಲಕಿಯರ ವಿಭಾಗದಲ್ಲೂ 31 ಗುಣ ಗಳಿಸಿದ ತರೀಕೆರೆ ತಾಲ್ಲೂಕು ಬಾಲಕರ ವಿಭಾಗದಲ್ಲೂ ದ್ವಿತೀಯ ಸ್ಥಾನ ಗಳಿಸಿದವು.

ಪ್ರಥಮ ಬಾರಿಗೆ ಕೊಪ್ಪದಲ್ಲಿ ನಡೆಸಲಾದ ಈ ಕ್ರೀಡಾ ಕೂಟವನ್ನು ಭಾಗಶಃ ಹೊನಲು ಬೆಳಕಿನಲ್ಲಿ ನಡೆಸಲಾಗಿತ್ತು. ಇದರ ಉದ್ಘಾಟನೆಯನ್ನು ಶಾಸಕ ಗೋವಿಂದೇಗೌಡರ ಅಧ್ಯಕ್ಷತೆಯಲ್ಲಿ ಎಚ್. ಬಿ. ರಾಜಗೋಪಾಲ್ ರವರು ನೆರವೇರಿಸಿದರು. ಎಂ.ಡಿ. ಬಾಲಕೃಷ್ಣ ಮತ್ತು ಎ. ಮನೋಹರ ರಾವ್ ಮುಖ್ಯ ಅತಿಥಿಗಳಾಗಿದ್ದರು. ಕೆ.ವಿ. ಮಜುನಾಥಶೆಟ್ಟರ ಅಧ್ಯಕ್ಷತೆಯಲ್ಲಿ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿಗಳಾದ ಸುಕಂತ್ ಮಹಾಪಾತ್ರ ಬಹುಮಾನ ವಿತರಿಸಿದರು. ರಾಷ್ಟ್ರೀಯ ಕ್ರೀಡಾಪಟು ಕು|| ಜಿ. ಎಸ್. ಗೀತಾಳನ್ನು ವಿನಯಲೂಥ್ರ ಅವರು ಸನ್ಮಾನಿಸಿದರು. ಎ. ರಮೇಶ್ ರಾವ್ ಮುಖ್ಯ ಅತಿಥಿಗಳಾಗಿದ್ದರು.

(ವರದಿ: ಹಾ.ಅ. ಗೋಪಾಲ್.)

# ಗಾರ್ಡ್‌ನಿಂದ ಸುಲಿಗೆ

ಅಡ್ಡಗದ್ದೆ: ಇಲ್ಲಿಗೆ ಸಮೀಪದ ಹೊನಗೋಡಿನಲ್ಲಿ ನ. 12ರಂದು ಅರಣ್ಯ ಸರ್ವೆ ವಿಭಾಗದ ಲಕ್ಷ್ಮಣ ಎಂಬ ಗಾರ್ಡ್ ಸ್ಥಳೀಯ ಪೆಟ್ಟಿಗೆ ಅಂಗಡಿಯ ಸುಧಾಕರನ ಮಧ್ಯಸ್ಥಿಕೆಯಲ್ಲಿ ರೈತರ ಮನೆಗಳಿಗೆ ಬಂದು, ಅವರುಗಳ ಮನೆಗಳಿರುವ ಜಾಗಕ್ಕೆ ಹತ್ತಿಪ್ಪತ್ತು ಸಾವಿರ ರೂ.ಮಾಲಿಕೆ ಕಟ್ಟಬೇಕಾದೀತೆಂದು ಬೆದರಿಸಿ ಹಣ ಸುಲಿಗೆ ಮಾಡಿದ್ದು, ಈತನ ವಿರುದ್ಧ ಅಗತ್ಯ ಕ್ರಮ ತೆಗೆದುಕೊಳ್ಳಬೇಕೆಂದು ಗ್ರಾಮಸ್ಥರು ಸಂಬಂಧಪಟ್ಟ ಅಧಿಕಾರಿಗಳಿಗೆ ದೂರು ನೀಡಿ ಒತ್ತಾಯಿಸಿದ್ದಾರೆ

## ಆಯ್ಕೆ

ಕೊಪ್ಪ ಟೌನ್ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ 1986–87 ರಿಂದ 1988–89ರ 3 ವರ್ಷದ ಅವಧಿಗೆ ಈ ಕೆಳಕಂಡ 15 ಜನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಕೆ. ವಸಂತ ಅಜಿಲ, ಹರೀಶ ಕೆ.ಎಸ್., ಎಸ್.ಜಿ. ಸೂರ್ಯನಾರಾಯಣ ಸುರೇಶ ಸುಂದರ ಜೋಶಿ, ಎಸ್. ಆರ್. ನಾರಾಯಣ ಭಟ್ಟ, ಕುಟ್ಟಿ ಶೆಟ್ಟಿ, ಮುಲ್ಕಿ, ಕೆ. ಎಲ್. ಮೋತೀಲಾಲ್, ಜಿ. ಎಸ್. ಶೀಪ ಭಟ್ಟ, ವರದರಾಜ್ ಎ. ಕೆ , ಕೆ. ಕೃಷ್ಣ, ಯು. ಕೃಷ್ಣಶೆಟ್ಟಿ, ಕೆ. ಕುಮಾರ್, ಪಿ.ಬಿ. ಆದಿತ್ಯ, ಎಚ್. ಶ್ರೀಶಶಿಕುಮಾರ್, ಎ. ಜಿ. ನಾರಾಯಣ ಮೂರ್ತಿ

# ಬಗರ್ ಹುಕುಂ ಭೂಮಿಗೆ ಸಾಗುವಳಿ ಚೀಟಿ ಒತ್ತಾಯಿಸಿ ನ. ರಾ. ಪುರ ಸಿಪಿಐ ಧರಣಿ

ನರಸಿಂಹರಾಜಪುರ : ಸಾಮಾನ್ಯ ರೈತರು ಮತ್ತು ರೈತ ಕಾರ್ಮಿಕರೇ ಹೆಚ್ಚಾಗಿರುವ ನರಸಿಂಹರಾಜಪುರ ತಾಲ್ಲೂಕಿನಲ್ಲಿ ಯಾವುದೇ ಕೈಗಾರಿಕೆ ಅಥವಾ ಇತರ ಯಾವುದೇ ದುಡಿಮೆಯ ಮಾರ್ಗವಿಲ್ಲದೆ ಕೃಷಿಯನ್ನೇ ಅವಲಂಬಿಸಿ ಸರ್ಕಾರಿ ಭೂಮಿಯನ್ನು ಹತ್ತಾರು ವರ್ಷಗಳಿಂದ ಬಗರ್ ಹುಕುಂ ಸಾಗುವಳಿ ಮಾಡುತ್ತಿರುವ ಬಡವರು, ಸರ್ಕಾರಕ್ಕೆ ಹಕ್ಕು ಪತ್ರಕ್ಕಾಗಿ ಅರ್ಜಿ–ಮನವಿಗಳನ್ನು ಸಲ್ಲಿಸಿದ್ದರೂ ಇಂದಿಗೂ ಸರ್ಕಾರ ಅವರಿಗೆ ಹಕ್ಕು ಪತ್ರ ನೀಡಿಲ್ಲ. ಕೆಲವೊಮ್ಮೆ ನೂರಾರು ಹಂಗಾಮಿ ಹಕ್ಕು ಪತ್ರ ನೀಡಿದ ಸರ್ಕಾರ ನಂತರ ಅದನ್ನು ವಜಾ ಮಾಡಿದೆ. ರೆವಿನ್ಯೂ ಮತ್ತು ಫಾರೆಸ್ಟ್ ಭೂಮಿ ವಿಂಗಡನೆ ಮಾಡದೇ, ಅರಣ್ಯ ಇಲಾಖೆಯ ಸಿಬ್ಬಂದಿಗಳು ಹಾಗೂ ಸರ್ಕಾರ ಬಡವರ ಮನೆಗಳನ್ನು ಬೀಳಿಸಿದೆ. **ಬಡವ ಮೆಟ್ಟಿದ ನೆಲವೆಲ್ಲಾ ಸರ್ಕಾರದ್ದು ಆದರೆ ಧನಿಕರು ಅಪೇಕ್ಷಿಸಿದ ಭೂಮಿಗಳು ಅರಣ್ಯ ಭೂಮಿಗಳಾಗಿದ್ದರೂ** ಇಂದು ಎಸ್ಟೇಟ್ ಗಳಾಗುತ್ತಿವೆ. ಹೀಗಾಗಿ, ತಾಲ್ಲೂಕಿನ ರೈತರು ಹಾಗೂ ರೈತ ಕಾರ್ಮಿಕರುಗಳಿಗೆ ಭೂಮಿ ಇಲ್ಲದೆ ಬಹಳ ತೊಂದರೆಯಾಗಿದೆ.

ಇದೇ ಸೆ. 27ರಂದು ಸರ್ಕಾರಕ್ಕೆ (ತಹಸೀಲ್ದಾರರ ಮೂಲಕ) ಮನವಿಗಳನ್ನು ಸಲ್ಲಿಸಿ, ಬಗರ್ ಹುಕುಂ ಭೂಮಿಗೆ ಸಾಗುವಳಿ ಪತ್ರ ಕೊಡಿಸಬೇಕೆಂದು ಬೇಡಿಕೆ ಇಟ್ಟಾಗ್ಯೂ ಇದುವರೆವಿಗೂ ಯಾವುದೇ ಕ್ರಮ ಕೈಗೊಳ್ಳದೇ ಇದ್ದು, ಸರ್ಕಾರಿ ಅಧಿಕಾರಿಗಳ, ಸಿಬ್ಬಂದಿಗಳ ದೌರ್ಜನ್ಯ, ಕಾರ್ಮಿಕರ ಹಾಗೂ ಸಣ್ಣ ರೈತರ ಮೇಲೆ ಸತತವಾಗಿ ನಡೆಯುತ್ತಿದೆ.

ಹೀಗೆಂದು ಇಲ್ಲಿನ ಸಿ ಪಿ. ಐ. ಶಾಖೆ ಆಪಾದಿಸಿ, ನ. 21ರಂದು ರೈತರ ಬೇಡಿಕೆ ಈಡೇರಿಕೆಗೆ ಒತ್ತಾಯಿಸಿ, ಧರಣಿ ನಡೆಸಿ, ಈ ಹಿಂದೆ ಸಲ್ಲಿಸಿದ್ದ ಮನವಿ ಪತ್ರದಲ್ಲಿನ 8 ಅಂಶಗಳ ಬೇಡಿಕೆಯನ್ನು ಈ ಕೂಡಲೇ ಈಡೇರಿಸಬೇಕೆಂದು ಒತ್ತಾಯಿಸಿತು.

## ನವೋದಯ ಶಾಲೆ ಆಯ್ಕೆ ಪಟ್ಟಿ ಪ್ರಕಟಣೆ

ಬಾಳೆಹೊನ್ನೂರು: ಬಾಳೆಹೊನ್ನೂರು ಕಾಫಿ ಸಂಶೋಧನಾ ಕೇಂದ್ರದಲ್ಲಿ ಪ್ರಾರಂಭವಾಗಿರುವ ನವೋದಯ ಶಾಲೆಯ ವಿದ್ಯಾರ್ಥಿಗಳ ಆಯ್ಕೆ ಪಟ್ಟಿಯನ್ನು ಶಾಲೆಯ ಸೂಚನಾ ಫಲಕದಲ್ಲಿ (ನ. ೨೯)ರಂದು ಪ್ರಕಟಿಸಲಾಗುತ್ತದೆ ಎಂದು ಪ್ರಿನ್ಸಿಪಾಲ್ ರವೀಂದ್ರ ತಿಳಿಸಿದ್ದಾರೆ.

## ಚಿಲ್ಲರೆ ನಾಣ್ಯ

ಕೊಪ್ಪ: ಇಲ್ಲಿನ ಮೈಸೂರು ಬ್ಯಾಂಕ್ ಶಾಖೆಯಲ್ಲಿ ಪ್ರತಿ ಗುರುವಾರ ಚಿಲ್ಲರೆ ನಾಣ್ಯಗಳನ್ನು ಕ್ಲುಪ್ತ ಪ್ರಮಾಣದಲ್ಲಿ (ಲಭ್ಯತೆಯನ್ನನುಸರಿಸಿ)ವಿತರಿಸಲಾಗುತ್ತಿದೆಯೆಂದು ಮ್ಯಾನೇಜರ್ ಕೆ.ಟಿ.ಸಿ. ಶರ್ಮ ತಿಳಿಸಿದ್ದಾರೆ





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ

27x3 = 81x3·50 / 2·50

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ -19

5ನೇ ವರ್ಷ 12ನೇ ಸಂಚಿಕೆ ಕೊಪ್ಪ 30-11-1986 ಭಾನುವಾರ ಬೆಲೆ 40 ಪೈಸೆ



## ಕಳವು ಮಾಲು ವಶ, ಇಬ್ಬರ ಸೆರೆ

**ಕೊಪ್ಪ : ಕಳೆದ ಒಂದೂವರೆ ವರ್ಷದಿಂದ ಇಲ್ಲಿನ ಪುರಸಭೆಯ ನೌಕರರ ನಿರ್ಜನ ವಸತಿ ಗೃಹವೊಂದರಿಂದ ಕಳುವಾಗುತ್ತ ಬಂದಿದ್ದ ಸುಮಾರು 10 ಸಾವಿರ ರೂ. ಮೌಲ್ಯದ ವಸ್ತುಗಳನ್ನು ಪೋಲೀಸರು ವಶಪಡಿಸಿಕೊಂಡು ಆರೋಪಿಗಳನ್ನು ಬಂಧಿಸಿದ್ದಾರೆ.**

ಹಿರೀಕೆರೆಯ ಸಮೀಪವಿರುವ ಮುಖ್ಯ ನೀರಿನ ಟ್ಯಾಂಕ್ ಬಳಿ ಕಟ್ಟಿಸಿರುವ ನೌಕರರ ವಸತಿಗೃಹ ಕಟ್ಟಡದಲ್ಲಿ ಯಾರೂ ವಾಸ ಇಲ್ಲದಿದ್ದು, ಅಲ್ಲಿ ಇಡಲಾಗಿದ್ದ ಪಿವಿಸಿ ಮತ್ತು ಜಿಐ ಪೈಪುಗಳು ಹಾಗೂ ಕಟ್ಟಡದ ಬಾಗಿಲು, ಕಿಟಕಿ, ಕಪಾಟು, ಚೌಕಟ್ಟು ಮುಂತಾದುವು 20-4-85ರಿಂದ ಕಳುವಾಗುತ್ತಿದ್ದವು. ಕಳೆದ 24ರಂದು ಇಂಥದೇ ಕಳವು ನಡೆದು ನ. 26ರಂದು ಪುರಸಭೆಯವರು ದೂರು ಸಲ್ಲಿಸಿದ್ದರು.

ಇನ್‌ಚಾರ್ಜ್ ಠಾಣಾಧಿಕಾರಿಯಾಗಿದ್ದ ದಫೇದಾರ್ ರಾಮಕೃಷ್ಣಯ್ಯ ಮತ್ತು ಸಿಬ್ಬಂದಿಗಳು ಗುಮಾನಿಯ ವ್ಯಕ್ತಿಗಳಾದ ಹಿರೀಕೆರೆಯ ಜಾನಿ ಮಸ್ಕರೇನಸ್ ಮತ್ತು ಗುಣವಂತೆಯ ಲಿಯೊ ಡಿಸೋಜ ಇವರನ್ನು ಬಂಧಿಸಿ, ಅವರುಗಳು ನೀಡಿದ ಮಾಹಿತಿಯಂತೆ ಅವರ ಮನೆಗಳ ಬಳಿ ಬಚ್ಚಿಟ್ಟದ್ದ ಕದ್ದ ಬಹುತೇಕ ಎಲ್ಲ ವಸ್ತುಗಳನ್ನು ವಶಪಡಿಸಿಕೊಂಡರು.

ಆರೋಪಿಗಳನ್ನು ಡಿ. 6ರವರೆಗೆ ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದ್ದು, ಸರ್ಕಲ್ ಇನ್‌ಸ್ಪೆಕ್ಟರ್ ವೈ. ಡಿ. ಕೇಶವಾನಂದ ಮುಂದಿನ ತನಿಖೆ ನಡೆಸುತ್ತಿದ್ದಾರೆ.

## ಕುಟುಂಬ ಯೋಜನೆ ಲಾಟರಿ ಬಸರಿಕಟ್ಟೆಗೆ ಬಹುಮಾನ

ಬಸರಿಕಟ್ಟೆ: ಅ. 24ರಂದು ಇಲ್ಲಿನ ಪ್ರಾಥಮಿಕ ಆರೋಗ್ಯ ಘಟಕದಲ್ಲಿ ಉದರದರ್ಶಕ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡಿದ್ದ ಶ್ರೀಮತಿ ರತ್ನಮ್ಮ ಕೋಂ ಆದಿರಾಜಯ್ಯ ಇವರಿಗೆ ಕುಟುಂಬಯೋಜನೆ ಅದೃಷ್ಟ ಬಹುಮಾನದಲ್ಲಿ 500 ರೂ. ಗಳ ಮೂರನೇ ಬಹುಮಾನ ಬಂದಿರುವುದಾಗಿ ವೈದ್ಯಾಧಿಕಾರಿ ಧರ್ಮಣ್ಣ ಗೌಡ ತಿಳಿಸಿದ್ದಾರೆ

## ಸಂ ಕ್ಷಿ ಪ್ತ ಸು ದ್ದಿ ಗ ಳು

### ಚೇರ್‌ಗೋಡಿನಲ್ಲಿ ತಾಳಮದ್ದಲೆ

ಶೃಂಗೇರಿ : ಇಲ್ಲಿಗೆ ಸಮೀಪದ ಚೇರ್‌ಗೋಡಿನ ತಿಮ್ಮಯ್ಯನವರ ಮನೆಯಲ್ಲಿ ಈಚೆಗೆ ಹೊನ್ನವಳ್ಳಿಯ ಶ್ರೀ ವೆಂಕಟೇಶ್ವರ ಯಕ್ಷಗಾನ ಕಲಾ ಸಂಘ ಹಾಗೂ ಅತಿಥಿ ಕಲಾವಿದರ ಕೂಡುವಿಕೆಯಿಂದ ಉತ್ತಮವಾದ ತಾಳಮದ್ದಲೆ ಕಾರ್ಯಕ್ರಮ ನಡೆಯಿತು. ಪ್ರಖ್ಯಾತ ಭಾಗವತ ಕಾಳಿಂಗ ನಾವುಡ, ಚಂಡೆವಾದಕರಾಗಿ ರಾಮಕೃಷ್ಣ ಮಂದರ್ತಿಯವರು ಹಾಗೂ ಮದ್ದಲೆವಾದಕರಾಗಿ ಸ್ಥಳೀಯ ಕಲಾವಿದ ಎಚ್. ಕೆ. ರಮೇಶ್ ಭಾಗವಹಿಸಿ ಪ್ರೇಕ್ಷಕರನ್ನು ರಂಜಿಸಿದರು.

### ಚಿ. ಕೊ. ಗ್ರಾಮೀಣ ಬ್ಯಾಂಕ್ ಠೇವಣಿ ಸಂಗ್ರಹ ಮಾಸ

ಹಾಲ್ಮುತ್ತೂರು : ಇಲ್ಲಿನ ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕ್ ಶಾಖೆ ನ. 7ರಿಂದ ಡಿ. 5ರವರೆಗೆ 'ಠೇವಣಿ ಸಂಗ್ರಹ ಮಾಸ'ವನ್ನು ಆಚರಿಸುತ್ತಿದ್ದು, ಇದನ್ನು ನ. 7ರಂದು ಎಚ್. ವೈ. ಸೀತಾರಾಮಭಟ್ಟರ ಅಧ್ಯಕ್ಷತೆಯಲ್ಲಿ 'ಮುಂಜಾವು' ಸಂಪಾದಕ ಸಿರಿಮನೆ ನಾಗರಾಜ್ ಉದ್ಘಾಟಿಸಿದರು. ಎಚ್.ಎಸ್. ಸೀತಾರಾಮಯ್ಯ ಮುಖ್ಯ ಅತಿಥಿಗಳಾಗಿದ್ದರು.

ಚಿ. ಕೊ. ಬ್ಯಾಂಕ್ ಈ ಠೇವಣಿ ಸಂಗ್ರಹ ಮಾಸದಲ್ಲಿ ತನ್ನ ಎಲ್ಲಾ ಶಾಖೆಗಳ ಮೂಲಕ 35 ಲಕ್ಷ ರೂ. ಠೇವಣಿ ಸಂಗ್ರಹಣೆ ಹಾಗೂ 25 ಸಾವಿರ ಹೊಸ ಖಾತೆಗಳನ್ನು ತೆರೆಯುವ ಗುರಿಯನ್ನು ಹಾಕಿಕೊಂಡಿದೆ. 1984ರಲ್ಲಿ ಆರಂಭಿಸಲಾದ 23 ಗ್ರಾಮೀಣ ಬ್ಯಾಂಕ್‌ಗಳ ಪೈಕಿ ಚಿ. ಕೊ. ಗ್ರಾಮೀಣ ಬ್ಯಾಂಕ್ ಪ್ರಥಮ ಸ್ಥಾನದಲ್ಲಿದೆ.

### ಮೇರುತಿ ಜೇಸಿಯಿಂದ ಸಾಕ್ಷರತಾ ಕಾರ್ಯಕ್ರಮ

ಬಿಳಾಲುಕೊಪ್ಪ: ಇಲ್ಲಿನ ಮೇರುತಿ ಜೇಸಿ ಸಂಸ್ಥೆಯ "ಸಾಕ್ಷರತಾ ಕಾರ್ಯಕ್ರಮ"ದನ್ವಯ ಕನ್ನಡ ರಾಜ್ಯೋತ್ಸವವಾದ ನ. 1ರಂದು ಮೇಗುಂದಾ ಹೋಬಳಿಯ 4 ಹಿ. ಪ್ರಾ. ಶಾಲೆಗಳಲ್ಲಿ ಆಯಾ ಗ್ರಾಮದ ಅನಕ್ಷರಸ್ಥರನ್ನು ಬರಮಾಡಿಕೊಂಡು ಅವರ ಹೆಸರು ಬರೆಯಲು ಕಲಿಸಲಾಯಿತು.

ಇದಲ್ಲದೆ ಮಕ್ಕಳ ದಿನಾಚರಣೆ ಅಂಗವಾಗಿ ತಾಲ್ಲೂಕಿನ ಎಲ್ಲಾ ಪ್ರೌಢಶಾಲೆಗಳಲ್ಲಿನ ವಿದ್ಯಾರ್ಥಿಗಳು ಒಬ್ಬೊಬ್ಬರೂ ಕನಿಷ್ಠ 10 ಜನ ಅನಕ್ಷರಸ್ಥರಿಗೆ ಅಕ್ಷರಾಭ್ಯಾಸ ಮಾಡಿಸಿದಲ್ಲಿ ಅಂಥವರಿಗೆ ಬಹುಮಾನ ನೀಡುವುದಾಗಿ ಮೇರುತಿ ಜೇಸಿ ಸಂಸ್ಥೆ ಪ್ರಕಟಿಸಿದೆ. ಈ ಬಗ್ಗೆ ಎಲ್ಲಾ ಶಾಲೆಗಳಿಗೆ ಪತ್ರ ಬರೆಯಲಾಗಿದ್ದು ಪ್ರಗತಿಯ ವರದಿಯನ್ನು ಕಾಯಲಾಗಿದೆ.

## 3.5ಲಕ್ಷ 'ನುಂಗಿ'14 ವರ್ಷ "ಜೀರ್ಣಿಸಿಕೊಂಡ" ಕಾಲುವೆಯಲ್ಲಿ ಕೊನೆಗೂ ಹರಿಯಿತು ನೀರು!

ಕುದುರೆಗುಂಡಿ : ಇಲ್ಲಿಗೆ ಸಮೀಪದ ಸೀತೂರಿನ ಬಳಿ ನಾಗರಮಕ್ಕಿಯಲ್ಲಿ ಅಬ್ಬಿಗುಂಡಿ ಹಳ್ಳಕ್ಕೆ ನಿರ್ಮಿಸಿರುವ ವಡ್ಡಿನ ಕಾಲುವೆಯನ್ನು ನ 21 ರಂದು ಶಾಸಕ ಗೋವಿಂದ ಗೌಡರು ಉದ್ಘಾಟಿಸಿದಾಗ, ಆ ಕಾಲುವೆಯಡಿಯಲ್ಲಿ 'ಹೂತು' ಹೋಗಿದ್ದ ಭ್ರಷ್ಟತೆಯ ಕಳೇಬರವೊಂದು ಬೆಳಕಿಗೆ ಬಂತು.

ಸುಮಾರು 14 ವರ್ಷದ ಹಿಂದೆ ಈ ಕಾಲುವೆ ನಿರ್ಮಾಣಕ್ಕೆಂದು ಮೂರುವರೆ ಲಕ್ಷ ರೂ. ಖರ್ಚಾಗಿದ್ದು, ಪಿಕ್-ಅಪ್ ಮಾತ್ರ ಉತ್ತಮವಾಗಿ ನಿರ್ಮಿಸಲ್ಪಟ್ಟಿದ್ದರೂ, 'ಕಾಲುವೆ' ಎನ್ನುವುದು ಕೇವಲ ಸರ್ಕಾರದ ಹಣ ನುಂಗಲಿಕ್ಕೆ ಒಂದು ನೆಪ ಮಾತ್ರವಾಗಿ ನಿರ್ಮಾಣವಾಗಿದೆ. ಗುಡ್ಡದ ಕಡೆ, ಎಲ್ಲೆಂದರಲ್ಲಿ ತೋಡಿರುವ ಈ ಕಾಲುವೆ ಕೆಲವೆಡೆ 50 ಅಡಿ ಆಳ ಹೊಂದಿದೆ. (ಮಣ್ಣಿನ ಕೆಲಸ ಸಿಕ್ಕಿದಷ್ಟೂ ಕಾಮಗಾರಿಗಳಲ್ಲಿ ಲಾಭ ಜಾಸ್ತಿ ನಷ್ಟೆ!) ಆದರೆ ಈವರೆಗೂ ಕಾಲುವೆಯಲ್ಲಿ ಒಂದು ಹನಿ ನೀರೂ ಹರಿದಿರಲಿಲ್ಲ. ಅದು ಹರಿಯುವಂತೆಯೂ ಇರಲಿಲ್ಲ.

ಈಗ ಎನ್‌ಆರ್‌ಇಪಿ ಯಿಂದ 45 ಸಾವಿರ ರೂ. ವೆಚ್ಚದಲ್ಲಿ ಹೊಸದಾಗಿ ಕಾಲುವೆ ನಿರ್ಮಿಸಿದ್ದು, 4-6 ಅಡಿಗಳಿಗಿಂತ ಹೆಚ್ಚು ಎಲ್ಲೂ ಆಳ ಹೋಗಿಲ್ಲವೆನ್ನಲಾಗಿದೆ.

ಈ ವಿಚಾರ ಬಹಿರಂಗಗೊಳಿಸಿದ ಗೌಡರು "ಹಿಂದೆಲ್ಲ ನುಂಗುವುದೇ ಗುರಿಯಾಗಿ, ಅವರ ಉಸ್ತುವಾರಿ ನೋಡಿಕೊಳ್ಳುವ ನಾಯಕರೂ ಅಂಥವರೇ ಆಗಿರುತ್ತಿದ್ದರು. ಆದರೆ ಈಗ ನಾವು ಜನತೆಯ ಓಟಿನ ಋಣ ತೀರಿಸಲು ಹೃತ್ಪೂರ್ವಕ ಶ್ರಮಿಸುತ್ತಿದ್ದೇವೆ" ಎಂದರು. ಈ ಕಾಲುವೆಯನ್ನು ದಕ್ಷವಾಗಿ ನಿರ್ಮಿಸಿದ ಸಣ್ಣ ನೀರಾವರಿ ಇಲಾಖೆಯ ಇಂಜಿನಿಯರುಗಳನ್ನು ಅವರು ಶ್ಲಾಘಿಸಿದರು.

ಮೀಗ ಚಂದ್ರಶೇಖರ್ ಅಧ್ಯಕ್ಷತೆ ವಹಿಸಿದ್ದು, ಶರತ್ ಕಲ್ಕೆ, ಗೋಪಾಲರಾವ್, ಆನಂದರಾಮ ಭಟ್ ಮುಖ್ಯ ಅತಿಥಿಗಳಾಗಿದ್ದರು.

(ವರದಿ: ಎಂ.ಆರ್. ಭಾಸ್ಕರ್.)

## ಅರಣ್ಯ ಇಲಾಖೆ ಕ್ರಮ: ಸ್ಥಳೀಯರ ಅಸಮಾಧಾನ

ಆಗಳಗಂಡಿ: ಇಲ್ಲಿಗೆ ಸಮೀಪದ ಸತ್ತಿಕಲ್ಲು ಎಂಬಲ್ಲಿ ಶೃಂಗೇರಿ ಅರಣ್ಯ ವಲಯದ ಕಾವಲುಗಾರರು ಪ್ಲಾಂಟೇಶನ್ ಒಳಗೆ ಬೆಳೆದಿದ್ದ ಹುಲ್ಲನ್ನು ಮೇಯುತ್ತಿದ್ದ ಹಸುಗಳನ್ನು ಈಚೆಗೆ ಅರಣ್ಯ ಸಿಬ್ಬಂದಿ ದೊಡ್ಡಿಗೆ ಹೊಡೆದುಕೊಂಡು ಹೋಗುತ್ತ ದಾರಿಯಲ್ಲಿ ಸಿಕ್ಕವನ್ನೂ ಹೊಡೆದುಕೊಂಡು ಹೋಗಿದ್ದು ಎಷ್ಟೋ ಜಾನುವಾರುಗಳು ವಾಪಸು ಸಿಕ್ಕಿಲ್ಲವೆಂದು ಗ್ರಾಮಸ್ಥರು ದೂರಿದ್ದಾರೆ.

ಈ ಹುಲ್ಲು ಬೇಸಿಗೆಯಲ್ಲಿ ಒಣಗುವುದರಿಂದ ಬೆಂಕಿ ಬಿದ್ದೀತೆಂದು ಗಾರ್ಡ್‌ಗಳೇ ದನ ಮೇಯಿಸಲು ಹೇಳಿದ್ದೆಂದಿರುವ ರೈತರು, ಇದರ ಬದಲು ಕೆಲವು ಜನ ಜವಾಬ್ದಾರಿಯುತ ವ್ಯಕ್ತಿಗಳಿಗೆ ಒಳಗಿನ ಹುಲ್ಲನ್ನು ಕೊಯ್ದು ಒಯ್ಯಲು ಅನುಮತಿ ಕೊಡುವುದು ಲೇಸು ಎಂದಿದ್ದಾರೆ.

---

### ಅಡ್ಡಗದ್ದೆಯಲ್ಲಿ ಸಹಕಾರಿ ಸಪ್ತಾಹ

ಅಡ್ಡಗದ್ದೆ: ಕಾವಡಿ ಸೇವಾ ಸಹಕಾರ ಸಂಘದ ಆಶ್ರಯದಲ್ಲಿ ಅಖಿಲ ಭಾರತ ಸಹಕಾರಿ ಸಪ್ತಾಹವನ್ನು ಇಲ್ಲಿ ನ. 19ರಂದು ಕೆ.ಎಂ. ಶ್ರೀನಿವಾಸ್‌ರ ಅಧ್ಯಕ್ಷತೆಯಲ್ಲಿ ಆಚರಿಸಲಾಯಿತು. ಈ ಸಮಾರಂಭದಲ್ಲಿ ಗೋವಿಂದರಾವ್ ಪುಣೇಕರ್ ಹಾಗೂ ಕಿರಕೋಡು ಸೀತಾರಾಮಭಟ್ಟರು ಮತ್ತು ಸುತ್ತಮುತ್ತಲಿನ ಸಹಕಾರಿ ಸಂಘಗಳವರು ಉಪಸ್ಥಿತರಿದ್ದರು.

### ಕೂಗ್ರೆ ಕಾರ್ಪೊರೇಶನ್ ಬ್ಯಾಂಕ್ ಗ್ರಾಹಕರ ಸಮಾವೇಶ

ಶಾಂತಿಗ್ರಾಮ: ಇಲ್ಲಿನ ಕಾರ್ಪೊರೇಷನ್ ಬ್ಯಾಂಕಿನ ಗ್ರಾಹಕರ ಸಮಾವೇಶ ಈಚೆಗೆ ಜರುಗಿತು. ಬ್ಯಾಂಕಿನ ಹಾಸನ ವಿಭಾಗೀಯ ಮ್ಯಾನೇಜರ್ ಬಿ ಹರಿಶ್ಚಂದ್ರಭಟ್ ಮುಖ್ಯ ಅತಿಥಿಗಳಾಗಿದ್ದರು ಗ್ರಾಹಕರ ಪರವಾಗಿ ಜಿ. ಎಸ್. ಅನಂತರಾಮ್, ಕೆ. ಆರ್. ಚಂದ್ರಶೇಖರ್, ಎಸ್. ಪಿ. ಶ್ರೀಪಾಲಯ್ಯ, ಎಚ್. ನೊಯಿದ್ದೀನ್, ಬಿ. ಜಿ. ರವೀಂದ್ರ, ಕೆ.ಆರ್. ದೇವೇಂದ್ರ, ಕೆ.ಶಿವಶಂಕರರಾವ್ ಮೊದಲಾದವರು. ಕೇಳಿದ ಪ್ರಶ್ನೆಗಳಿಗೆ ಅವರು ಸೂಕ್ತ ಉತ್ತರವಿತ್ತರು. ಸಭೆಯ ಅಧ್ಯಕ್ಷತೆಯನ್ನು ಬಿ.ಕೆ. ವೆಂಕಪ್ಪಯ್ಯ ವಹಿಸಿದ್ದರು. ಶಾಖಾಧಿಕಾರಿ ಪಿ. ಎಸ್. ಭಟ್ ಸ್ವಾಗತಿಸಿ, ವಂದಿಸಿದರು. ಸಮಾರಂಭದಲ್ಲಿ 120ಕ್ಕೂ ಹೆಚ್ಚು ಗ್ರಾಹಕರು ಭಾಗವಹಿಸಿದ್ದರು.

# ನಮ್ಮ ಸಾಧನೆಯ ಸ್ಮರಣೀಯ ಕನ್ನಡ ರಾಜ್ಯೋತ್ಸವ

★ ದುರ್ಬಲ ವರ್ಗಗಳ ಏಳಿಗೆಗಾಗಿ ವಿನೂತನ ಯೋಜನೆಗಳು

★ ಬರದ ವಿರುದ್ಧ ಸಮರ

★ ಹಳ್ಳಿಹಳ್ಳಿಗೂ ಅಧಿಕಾರ ವಿಕೇಂದ್ರೀಕರಣ

ಕರ್ನಾಟಕ ಸರ್ಕಾರಕ್ಕೆ ತನ್ನ ಹೊಣೆಗಾರಿಕೆಯ ಬಗ್ಗೆ ಸಂಪೂರ್ಣ ಅರಿವಿದೆ. ತನ್ನನ್ನು ಆರಿಸಿದ ಜನ ಕೋಟಿಯ ಅಭಿಪ್ರಾಯಕ್ಕೆ ಸರ್ಕಾರ ಬದ್ಧವಾಗಿದೆ. ಜನತೆಗಾಗಿ ಸರ್ಕಾರ ಏನೆಲ್ಲಮಾಡಿದೆ, ಮಾಡುತ್ತಿದೆ ಎಂಬುದನ್ನು ಅರಿಯುವಹಕ್ಕು ಅವರಿಗಿದೆ. ಈ ಮಾಹಿತಿಯನ್ನು ಜನರಿಗೆ ತಿಳಿಯಪಡಿಸುವುದು ಸರ್ಕಾರದ ಕರ್ತವ್ಯ. ಈ ಪರಸ್ಪರ ಅರಿವಿನಿಂದ ಮಾತ್ರ ಸರ್ಕಾರ ಮತ್ತು ಜನತೆಯ ನಡುವೆ ಸೌಹಾರ್ದಯುತ ಸಂಬಂಧ ಬೆಳೆಯಲು ಸಾಧ್ಯ.

ನಿಮಗೆಲ್ಲ ತಿಳಿದಿರುವಂತೆ ನಮ್ಮರಾಜ್ಯ ಕಳೆದ ನಾಲ್ಕು ವರ್ಷಗಳಿಂದ ಸತತವಾಗಿ ಹಿಂದೆಂದೂ ಕಂಡರಿಯದ ಭೀಕರ ಬರಗಾಲವನ್ನೆದುರಿಸಬೇಕಾಯಿತು. ಪ್ರಕೃತಿ ವಿಕೋಪದ ಈ ದುರ್ಭರ ಸನ್ನಿವೇಶದಲ್ಲೂ ಸರ್ಕಾರದ ಸಾಧನೆ ಕಣ್ಣಿಗೆ ಕಾಣುವಂತಹುದು, ಮೆಚ್ಚುವಂತಹುದು. ಕರ್ನಾಟಕ ಒಂದು ರಾಜ್ಯವಾಗಿ ರೂಪುಗೊಂಡು ಮೂವತ್ತು ಸಂವತ್ಸರಗಳು ಸಂದಿವೆ. ಈ ಸಂದರ್ಭದಲ್ಲಿ ಜನತೆಯ ಆಶೋತ್ತರಗಳನ್ನು ಈಡೇರಿಸಲು ಸರ್ಕಾರ ಅನುಷ್ಠಾನಗೊಳಿಸಿರುವ ಯೋಜನೆಗಳ ಹಲವು ವಿವರಗಳನ್ನು ಜನತೆಯ ಮುಂದಿಡಲು ಹೆಮ್ಮೆ ಎನಿಸುತ್ತದೆ.

ಸಮಾಜದ ಹಿಂದುಳಿದ ವರ್ಗ ಮತ್ತು ಕಡುಬಡವರನ್ನು ಬಡತನದ ರೇಖೆಯಿಂದ ಮೇಲೆತ್ತಿ ಅವರ ಜೀವನ ಸುಧಾರಣೆಗಾಗಿ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ಸರ್ಕಾರ ಕೈಗೊಂಡಿರುವ ಕಾರ್ಯಕ್ರಮಗಳು ರಾಷ್ಟ್ರದಲ್ಲೇ ಮಾದರಿ ಎನಿಸಿವೆ. ಗ್ರಾಮೀಣ ಪ್ರದೇಶಕ್ಕೆ ಕುಡಿಯುವ ನೀರು, ಶಾಲಾ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರ, ಕಡುಬಡವರಿಗೆ ಅತಿ ಕಡಿಮೆ ದರದಲ್ಲಿ ಆಹಾರ ಧಾನ್ಯ ಒದಗಿಸಲು ಹಸಿರು ಕಾರ್ಡು, ಅಸಂಘಟಿತ ಕಾರ್ಮಿಕರು ಅಪಘಾತಕ್ಕೊಳಗಾದರೆ ನೆರವಾಗುವ 'ಆಶಾಕಿರಣ', ಕಾರ್ಮಿಕ ಗರ್ಭಿಣಿ ಸ್ತ್ರೀಯರಿಗೆ 'ಹೆರಿಗೆ ಭತ್ಯೆ', ಅನಾಥ ವಿಧವೆಯರಿಗೆ ಮಾಸಾಶನ, ಬಡವರು ಕಡಿಮೆ ಖರ್ಚಿನಲ್ಲಿಮದುವೆ ಮಾಡಲು 'ತಾಳೀಭಾಗ್ಯ', ರೈತ ಸಮುದಾಯಕ್ಕೆ ಭಾರೀ ಪ್ರಮಾಣದ ರಿಯಾಯಿತಿ, ಜನತೆಯ ನಿತ್ಯದ ಬೇಡಿಕೆ ಪೂರೈಸಲು ಸಾಮಾಜಿಕ ಅರಣ್ಯ ಕಾರ್ಯಕ್ರಮ, ಸಣ್ಣ ರೈತರು, ಕೃಷಿ ಕಾರ್ಮಿಕರು ಹಾಗೂ ಕುಶಲ ಕರ್ಮಿಗಳಿಗೆ ಅನುಕೂಲವಾಗುವ ತೀವ್ರ ಗ್ರಾಮೀಣಾಭಿವೃದ್ಧಿ ಕಾರ್ಯ — ಹೀಗೆ ಜನಹಿತ ದೃಷ್ಟಿಯ ಹತ್ತೆಂಟು ಯೋಜನೆಗಳ ಪರಿಣಾಮಕಾರಿ ಅನುಷ್ಠಾನ.

ಇದಲ್ಲದೆ ಅಧಿಕಾರ ವಿಕೇಂದ್ರೀಕರಣದ ಹಾದಿಯಲ್ಲಿ ಹೊಸ ಅಧ್ಯಾಯ ಆರಂಭಿಸಲಿರುವ ಜಿಲ್ಲಾ ಪರಿಷತ್ ಮಸೂದೆಯನ್ನು ಅನುಷ್ಠಾನಗೊಳಿಸಲು ದೃಢ ನಿರ್ಧಾರ ಕೈಗೊಂಡಿರುವ ಕರ್ನಾಟಕ ಸರ್ಕಾರ ಈ ದಿಸೆಯಲ್ಲಿ ದಿಟ್ಟ ಹೆಜ್ಜೆ ಇಟ್ಟಿದೆ. ಇದರಿಂದ ಗ್ರಾಮೀಣ ಜನತೆ ಸ್ಥಳೀಯ ಅಭಿವೃದ್ಧಿ ಕಾರ್ಯಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ಅಧಿಕಾರ ಪಡೆಯಲಿದೆ.

## ಕರ್ನಾಟಕ ಸರ್ಕಾರ
## ಪ್ರಜಾಹಿತ ಕಾರ್ಯದ ಪರಂಪರೆಯನ್ನು ಮುಂದುವರಿಸಲು
## ಪುನಃ ಮುಡಿಪು ಕಟ್ಟುತ್ತದೆ

ವಾ. ಪ್ರ. ಇ. / ವಾ. ಪ್ರ. ವಿ. ಆ/ ಸಿ. ಆರ್. / ಸಿ. 3 / 86-87 / 398
ದಿನಾಂಕ : 23/24-10-1986



ಕರ್ನಾಟಕ ವಾರ್ತೆ